# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 54
ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಸೂರಜ್ ರೇವಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಮತ್ತು ಸಾರ್ವಜನಿಕ ವಲಯ ಉದ್ಯಮಗಳ ಸಚಿವರು
ಉತ್ತರಿಸಬೇಕಾದ ದಿನಾಂಕ : 15.02.2022

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯಲ್ಲಿರುವ ಸಣ್ಣ ಕೈಗಾರಿಕೆಗಳ ಸಂಖ್ಯೆ ಎಷ್ಟು; (ಸಂಪೂರ್ಣ ವಿವರ ನೀಡುವುದು) | ಭಾರತ ಸರ್ಕಾರದ "ಉದ್ಯಮ ರಿಜಿಸ್ಟ್ರೇಷನ್" ಪೋರ್ಟಲ್ ಪ್ರಕಾರ (ದಿನಾಂಕ:31.01.2022 ವರೆಗೆ) ಹಾಸನ ಜಿಲ್ಲೆಯಲ್ಲಿ ಈ ಕೆಳಗಿನಂತೆ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ನೊಂದಣಿಯಾಗಿರುತ್ತವೆ.<br><br>ವರ್ಗ / ಘಟಕಗಳ ಸಂಖ್ಯೆ / ಉದ್ಯೋಗಿಗಳ ಸಂಖ್ಯೆ<br>ಸೂಕ್ಷ್ಮ / 7412 / 87147<br>ಸಣ್ಣ / 279 / 7011<br>ಒಟ್ಟು / 7691 / 94158 |
| ಆ) | ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ನಿರುದ್ಯೋಗಿಗಳಿಗೆ ಸರ್ಕಾರ ಯಾವ ರೀತಿ ಸಹಾಯ ನೀಡಲಾಗುತ್ತಿದೆ; (ಸಂಪೂರ್ಣ ವಿವರ ಒದಗಿಸುವುದು) | ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ರಾಜ್ಯ ಸರ್ಕಾರವು ಅನೇಕ ಕಾರ್ಯಕ್ರಮಗಳನ್ನು ರೂಪಿಸಿದ್ದು ಅವು ಈ ಕೆಳಗಿನಂತಿರುತ್ತವೆ.<br><br>1. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಠ ಸಾಲ ರೂ. 25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಠ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 6 ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br><br>3. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ. 75 ರಿಯಾಯಿತಿ |

<table>
<tr>
<td></td>
<td></td>
<td>ದರದಲ್ಲಿ ಕೈಗಾರಿಕಾ ನಿವೇಶನಗಳನ್ನು ಮತ್ತು ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br><br>4. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ. 60 ರಷ್ಟು ಗರಿಷ್ಟ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.<br><br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಟ ರೂ.5.00 ಕೋಟಿ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿರಹಿತ ಗರಿಷ್ಟ ರೂ.75 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ.<br><br>6. ಕರ್ನಾಟಕ ರಾಜ್ಯ ಕೈಗಾರಿಕಾ ನೀತಿ 2020-25 ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ.<br><br>1. ಮುದ್ರಾಂಕ ಶುಲ್ಕ ವಿನಾಯಿತಿ<br>2. ನೋಂದಣಿ ಶುಲ್ಕ ರಿಯಾಯಿತಿ.<br>3. ಬಂಡವಾಳ ಹೂಡಿಕೆ ಸಹಾಯಧನ<br>4. ಕಿರು ಮತ್ತು ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಸಹಾಯಧನ<br>5. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>6. ರಫ್ತು ಆಧಾರಿತ ಘಟಕಗಳಿಗೆ ರಿಯಾಯಿತಿ.<br>7. ತ್ಯಾಜ್ಯ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಸಹಾಯಧನ.<br>8. ವಿದ್ಯುತ್ ತೆರಿಗೆ ವಿನಾಯಿತಿ<br>9. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಸಹಾಯಧನ<br>10. ಮಳೆ ನೀರುಕೊಯ್ಲು / ಸಂರಕ್ಷಣೆ ಸಹಾಯಧನ<br>11. ತಂತ್ರಜ್ಞಾನ ಉನ್ನತೀಕರಣಕ್ಕೆ ಬಡ್ಡಿ ಸಹಾಯಧನ</td>
</tr>
<tr>
<td>ಇ)</td>
<td>ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಎಷ್ಟು ಜನ ನಿರುದ್ಯೋಗಿಗಳು ಅರ್ಜಿ ಹಾಕಿದ್ದಾರೆ? (ತಾಲ್ಲೂಕುವಾರು ವಿವರ ಒದಗಿಸುವುದು)</td>
<td>ಪ್ರಧಾನಮಂತ್ರಿ ಉದ್ಯೋಗ ಸೃಜನ ಯೋಜನೆಯಡಿ ಜಿಲ್ಲಾ ಕೈಗಾರಿಕಾ ಕೇಂದ್ರದಲ್ಲಿ 2021-22ನೇ ಸಾಲಿನಲ್ಲಿ ಕೆಳಕಂಡಂತೆ ಅರ್ಜಿ ಸ್ವೀಕರಿಸಲಾಗಿದೆ.<br><br>
<table>
<tr><th>ಕ್ರಸಂ</th><th>ತಾಲ್ಲೂಕು</th><th>ಸಂಖ್ಯೆ</th></tr>
<tr><td>1</td><td>ಆಲೂರು</td><td>9</td></tr>
<tr><td>2</td><td>ಅರಕಲಗೂಡು</td><td>26</td></tr>
<tr><td>3</td><td>ಅರಸೀಕೆರೆ</td><td>67</td></tr>
<tr><td>4</td><td>ಬೇಲೂರು</td><td>51</td></tr>
</table>
</td>
</tr>
</table>

| | | |
|---|---|---|
| 5 | ಚನ್ನರಾಯಪಟ್ಟಣ | 58 |
| 6 | ಹಾಸನ | 125 |
| 7 | ಹೊಳೆನರಸೀಪುರ | 19 |
| 8 | ಸಕಲೇಶಪುರ | 14 |
| | ಒಟ್ಟು | 369 |

ಸಿಐ 19 ಎಸ್‌ಎಸ್‌ಐ 2022

(ಎನ್.ನಾಗರಾಜು (ಎಂಟಿಬಿ))

ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು